# ಶ್ರೀಮತ್ಸುಮಧ್ವವಿಜಯ
# ಪ್ರಮೇಯಫಲಮಾಲಿಕಾ

ಅನುವಾದ : ಪಂ. ಸುರೇಶಾಚಾರ್ಯ ರಾಯಚೂರು

அனுவாத. சுரேசாசார்ய ராயசூரி

ஸ்ரீமத் சுமத்வ விஜய ப்ரமேய

பலமாலிகா

|| ಶ್ರೀಃ ||

# ಶ್ರೀಮತ್ಸುಮಧ್ವವಿಜಯಪ್ರಮೇಯಫಲಮಾಲಿಕಾ

**ಶ್ರೀಮಧ್ವವಿಜಯೇ ಸರ್ಗಾಃ ಷೋಡಶಾನುಕ್ರಮಾದಹಮ್ ।**
**ತೇಷಾಂ ಪ್ರಮೇಯಂ ವಕ್ಷ್ಯಾಮಿ ಸಂಗ್ರಹೇಣ ಫಲಂ ತಥಾ ॥ 1 ॥**

ಶ್ರೀ ಮಧ್ವವಿಜಯದಲ್ಲಿ 16 ಸರ್ಗಗಳಿದ್ದು, ಕ್ರಮವಾಗಿ ಅವುಗಳ ಪ್ರಮೇಯವನ್ನು ಮತ್ತು ಪ್ರತಿಯೊಂದು ಸರ್ಗದ ಫಲವನ್ನು ಸಂಗ್ರಹವಾಗಿ ಹೇಳುತ್ತೇನೆ.

**ಬಳಿತ್ಥೇತ್ಯಾದಿಸೂಕ್ತೋಕ್ತಂ ವಾಯೋ ರೂಪತ್ರಯಂ ಪರಮ್ ।**
**ಪ್ರಥಮೇ ಪ್ರಥಮಂ ಪ್ರೋಕ್ತಂ ದ್ವಿತೀಯಂ ತು ತತಃ ಪರಮ್ ॥ 2 ॥**

ಬಳಿತ್ಥಾಸೂಕ್ತ , ಪವಮಾನ ಸೂಕ್ತ . ಇವೇ ಮೊದಲಾದ ಸೂಕ್ತಗಳಲ್ಲಿ ವಾಯುದೇವರ ಮೂರು ಅವತಾರಗಳ ಮಹಿಮೆಯು ಹೇಳಲ್ಪಟ್ಟಿದೆ. ಪ್ರಥಮ ಸರ್ಗದಲ್ಲಿ ಪ್ರಥಮಾವತಾರರಾದ ಶ್ರೀ ಹನುಮಂತದೇವರ ಮಹಿಮೆಯನ್ನು, ನಂತರದಲ್ಲಿ ದ್ವಿತೀಯಾವತಾರರಾದ ಶ್ರೀಭೀಮಸೇನದೇವರ ಮಹಿಮೆಯನ್ನು ಹೇಳಿದ್ದಾರೆ.

**ಸಚ್ಛಾಸ್ತ್ರೇ ದೂಷಿತೇ ದುಷ್ಟೈಃ ಸುರಪ್ರಾರ್ಥನಯಾ ಹರೇಃ ।**
**ಆಜ್ಞಯಾ ಚಾವತೀರ್ಣಸ್ಯ ದ್ವಿತೀಯೇ ಬಾಲ್ಯಸತ್ಕಥಾಃ ॥ 3 ॥**

ದುಷ್ಟ ಜನರಿಂದ ಸಚ್ಛಾಸ್ತ್ರವು ದೂಷಿಸುತ್ತಿರಲು ದೇವತೆಗಳ ಪ್ರಾರ್ಥನೆಯಿಂದ, ಭಗವಂತನ ಆಜ್ಞೆಯಿಂದ ಭೂಲೋಕದಲ್ಲಿ ಅವತರಿಸಿದರು. ದ್ವಿತೀಯ ಸರ್ಗದಲ್ಲಿ ಅನೇಕ ಬಾಲ್ಯ ಸತ್ಕಥೆಗಳು ಹುರಳಿಯನ್ನು ತಿಂದದ್ದು, ಹುಣಸೇ ಬೀಜವನ್ನು ಸಾಲಿಗನಿಗೆ ಕೊಟ್ಟು ತಂದೆಯನ್ನು ಋಣಮೋಚನ ಮಾಡಿದ್ದು ಇವೇ ಮೊದಲಾದವುಗಳು ವರ್ಣಿಸಲ್ಪಟ್ಟಿವೆ.

**ಉಪನೀತಃ ಸುವಿಧಿನಾ ಸ್ವಪಿತ್ರಾಽಧೀತವಾನ್ ದ್ವಿಜಾತ್ ।**
**ಬಹೂನ್ ವೇದಾನ್ ಕ್ಷಣೇನೈವ ತೃತೀಯೇ ಕಥಿತಂ ತ್ವಿದಮ್ ॥ 4 ॥**

ಮೂರನೇ ಸರ್ಗದಲ್ಲಿ ಶ್ರೇಷ್ಠ ಬ್ರಾಹ್ಮಣರಾದ, ತಂದೆಯಾದ ಮಧ್ಯಗೇಹ ಭಟ್ಟರಿಂದ ಚೆನ್ನಾಗಿ, ವಿಧಾನಪೂರ್ವಕವಾಗಿ ಉಪನಯನ ಸಂಸ್ಕಾರವನ್ನು ಹೊಂದಿ, ಗುರುಕುಲ ವಾಸ ಮಾಡಿ ಅತಿ ಸ್ವಲ್ಪ ಸಮಯದಲ್ಲಿಯೇ ಅನೇಕ ವಿಧ ವೇದಗಳ ಅಧ್ಯಯನವನ್ನು ಮಾಡಿ, ಗುರುಗಳಿಗೆ ಐತರೇಯ ಉಪನಿಷತ್ತಿನ ಅನೇಕ ರಹಸ್ಯ ಪ್ರಮೇಯ ಹೇಳಿ ಗುರುದಕ್ಷಿಣೆಯ ರೂಪವಾಗಿ ಕೊಟ್ಟರು.

**ತುರ್ಯಾಶ್ರಮಮನುಪ್ರಾಪ್ಯ ವೇದಾಂತನಿರತೋಽಭವತ್ ।**
**ಶಿಷ್ಯಾನಧ್ಯಾಪಯಾಮಾಸ ಸಂಪ್ರದಾಯಮಹಾಪಯನ್ ॥ 5 ॥**

ಹಿಂದಿನ ಜನ್ಮದಲ್ಲಿ ಭಾರತೀದೇವಿಯವರ ಅವತಾರರಾದ ದ್ರೌಪದೀ ದೇವಿಯವರ ಪವಿತ್ರ ಕೈಯಿಂದ ಭೋಜನ ಸ್ವೀಕರಿಸಿ, ಶುದ್ಧಾಂತಕರಣರಾದ ಶ್ರೀ ಅಚ್ಯುತಪ್ರೇಕ್ಷರಿಂದ ಸಂನ್ಯಾಸಾಶ್ರಮವನ್ನು ತೆಗೆದುಕೊಂಡು, ವೇದಾಂತದಲ್ಲಿ ಒಳ್ಳೇ ಆಸಕ್ತಿಯನ್ನು ತೋರಿಸಿದರು. ಅಂದರೆ ಉತ್ತಮ ರೀತಿಯಿಂದ ಸಂನ್ಯಾಸಧರ್ಮವನ್ನು ಪಾಲಿಸಿದರು. ಸಂನ್ಯಾಸಿಗಳ ಮುಖ್ಯ ಕರ್ತವ್ಯವಾದ ಅಧ್ಯಯನ, ಪ್ರವಚನಗಳನ್ನು ಸಂಪ್ರದಾಯಗನುಗುಣವಾಗಿ ಮಾಡಿದರು.

**ವ್ಯಾಖ್ಯಾನ್ ಭಾಷ್ಯಂ ಮಾಯಿಕೃತಂ ಜ್ಞಾಪಯನ್ ತಸ್ಯ ದುಷ್ಟತಾಮ್ ।**
**ಸೂಚಯನ್ನುತ್ತರಂ ಭಾಷ್ಯಂ ಜಿಗಾಯ ಪ್ರತಿವಾದಿನಃ ॥ 6 ॥**

ಶ್ರೀಮದಾಚಾರ್ಯರು ಮಾಯಿಕೃತ (ಶ್ರೀಸಂಕರಾಚಾರ್ಯ ಕೃತ) ಭಾಷ್ಯವನ್ನು ಅನುವಾದ ಮಾಡುತ್ತಾ, ಅದರಲ್ಲಿಯ ಅಸಾಂಗತ್ಯವನ್ನು , ದೋಷವನ್ನು ತೋರಿಸಿದರು. ತಾವು ಮುಂದೆ ಬ್ರಹ್ಮಸೂತ್ರಗಳಿಗೆ ಸಮೀಚೀನವಾದ ಭಾಷ್ಯವನ್ನು ರಚಿಸುತ್ತೇವೆ ಎಂದು ಸೂಚಿಸುತ್ತಾ, ವಾದದಲ್ಲಿ ಬಂದಂಥ ಅನೇಕ ಪ್ರತಿವಾದಿಗಳನ್ನು ಗೆದ್ದರು.

**ತತ್ರ ತತ್ರ ವಿಚಿತ್ರಾಣಿ ಚರಿತ್ರಾಣಿ ಪ್ರದರ್ಶಯನ್ ।**
**ಚರನ್ ಕ್ಷೇತ್ರೇಷು ಸರ್ವೇಷು ಹಿಮವಂತಂ ದದರ್ಶ ಸಃ ॥ 7 ॥**

ಶ್ರೀಮದಾಚಾರ್ಯರು ದಿಗ್ವಿಜಯ ಮಾಡುತ್ತಾ , ಅನೇಕ ಸಭೆಗಳಲ್ಲಿ ತಮ್ಮ ವಿಚಿತ್ರ ಮಹಿಮೆಯನ್ನು ತೋರಿಸಿದರು. ಒಂದು ಸಭೆಯಲ್ಲಿ ಶ್ರೀ ವಿಷ್ಣುಸಹಸ್ರನಾಮಕ್ಕೆ 'ವಿಶ್ವ'

ಶಬ್ದಕ್ಕೆ 100 ಅರ್ಥವಿದೆ ಎಂದು ತೋರಿಸಿ ತಮ್ಮ ಸರ್ವಜ್ಞತ್ವ ಪ್ರಕಟಿಸಿದರು. ಇನ್ನೊಂದು ಕಡೆಗೆ ತಮ್ಮ ತ್ರಿಕಾಲ ಜ್ಞಾನಿತ್ವವನ್ನು ತೋರಿಸಿದರು. ಹೀಗೆ ಸಂಚರಿಸುತ್ತಾ ಬದರೀ ಕ್ಷೇತ್ರಕ್ಕೆ ಬಂದು ಶ್ರೀಮನ್ನಾರಾಯಣನಿಗೆ ತಾವು ಬರೆದ ಗೀತಾಭಾಷ್ಯವನ್ನು ಕಾಣಿಕೆಯಾಗಿ ಕೊಟ್ಟರು.

**ಮನಸಾ ಮಾನಯನ್ ಮುಖ್ಯಗುರುಂ ವ್ಯಾಸಂ ಹೃದಂಬರೇ ।**
**ಅಪಶ್ಯಚ್ಚಕ್ಷುಷಾಽಪ್ಯತ್ರ ಸ್ಥಿತಂ ಮುನಿಗಣೈರ್ವೃತಮ್ ॥ 8 ॥**

ಶ್ರೀ ವೇದವ್ಯಾಸರಿಂದ ಆಜ್ಞಪ್ತರಾಗಿ ದೊಡ್ಡ ಬದರೀಗೆ ಹೋದರು. ಅಲ್ಲಿ ಅನೇಕ ಮುನಿಗಳ ಮಧ್ಯದಲ್ಲಿ ಅಲಂಕೃತರಾದ, ಮುಖ್ಯ ಗುರುಗಳಾದ ವೇದವ್ಯಾಸರನ್ನು ನೋಡಿ, ಆ ವ್ಯಾಸರ ಅನೇಕ ಗುಣರೂಪಗಳನ್ನು ತಮ್ಮ ಮನಸ್ಸಿನಲ್ಲಿ ಚಿಂತಿಸಿದರು.

**ನಾರಾಯಣಂ ನಮಸ್ಕೃತ್ಯ ತತ್ರಸ್ಥಂ ಗುರುಣಾ ಸಹ ।**
**ಗತಸ್ತಾಭ್ಯಾಮನುಜ್ಞಾತೋ ಭಾಷ್ಯಂ ಕರ್ತುಂ ಸತಾಂ ಮುದೇ ॥ 9 ॥**

ಗುರುಗಳಾದ ಶ್ರೀವೇದವ್ಯಾಸರಿಂದ ಸಹಿತರಾಗಿ ನರನಾರಾಯಣನನ್ನು ನಮಸ್ಕಾರ ಮಾಡಿ, ಆ ಪರಮಾತ್ಮನ ಮತ್ಸ್ಯ, ಕೂರ್ಮಾದ್ಯನಂತ ಅವತಾರಗಳನ್ನು ಚಿಂತನೆ ಮಾಡಿ, ತತ್ವಶ್ರವಣ ಮಾಡಿ, ಅವರಿಬ್ಬರಿಂದ ಆಜ್ಞೆಯನ್ನು ಪಡೆದು, ಸಜ್ಜನರ ಸಂತೋಷಕ್ಕಾಗಿ ಮತ್ತು ಉದ್ಧಾರಕ್ಕಾಗಿ ತಮ್ಮ ಅವತಾರದ ಮುಖ್ಯ ಕಾರ್ಯವಾದ ಸೂತ್ರ ಭಾಷ್ಯವನ್ನು ರಚಿಸಲಿಕ್ಕೆ ಅಲ್ಲಿಂದ ಹೊರಟರು.

**ಸ್ಥಾನಾಂತರೇ ವ್ಯಾಸಮುಖಾಚ್ಛ್ರುತ್ವಾ ಶಾಸ್ತ್ರಂ ತತೋ ಗತಃ ।**
**ಏಕವಿಂಶತಿದುರ್ಭಾಷ್ಯಖಂಡನಂ ಭಾಷ್ಯಮಾತನೋತ್ ॥ 10 ॥**

ದೊಡ್ಡ ಬದರಿಯಲ್ಲಿ ಶ್ರೀ ವೇದವ್ಯಾಸರ ಮುಖದಿಂದ ಶಾಸ್ತ್ರವನ್ನು ಶ್ರವಣ ಮಾಡಿ, ಮುಂದೆ ಅಲ್ಲಿಂದ ರಜತಪೀಠಪುರಕ್ಕೆ (ಉಡುಪಿಗೆ) ಗೋದಾವರಿ ಮಾರ್ಗದಿಂದ ಬರುವವರಾದರು. ಇಪ್ಪತ್ತೊಂದು ದುರ್ಭಾಷ್ಯಗಳನ್ನು ಖಂಡಿಸಿ (ಅದರಲ್ಲಿಯ ದೋಷಗಳನ್ನು ತೋರಿಸಿ), ನಿರ್ಮಲವಾದ, ಅಖಂಡ್ಯವಾದ, ತಮ್ಮ ಪ್ರತಿರೂಪದಂತಿರುವ, ಬಲಮೂರಿ ಶಂಖದಂತೆ ವಿಶಿಷ್ಟ ಸಕಲ ಸಂಪತ್ತನ್ನು ಕೊಡುವ ಶ್ರೇಷ್ಠವಾದ ಭಾಷ್ಯವನ್ನು ರಚಿಸಿದರು.

**ಯಥಾ ಹರೇಃ ಕಥಾಲಾಪಃ ಸುಖಾಯ ಕೃತಿನಾಂ ತಥಾ ।**
**ಸ್ವಸ್ಯಾಪೀತಿವಿಚಿತ್ರಾಣಿ ಚಾರಿತ್ರಾಣಿ ಚಕಾರ ಸಃ ॥ 11 ॥**

ಯಾವ ರೀತಿಯಾಗಿ ಶ್ರೀಹರಿಯ ಅದ್ಭುತವಾದ ಚರಿತ್ರೆಗಳನ್ನು ಭಕ್ತಿಯಿಂದ ಶ್ರವಣ ಮಾಡುವ ಸಜ್ಜನರಿಗೆ ಸುಖರೂಪವಾದ ಮೋಕ್ಷವನ್ನು ಕೊಡುವದೋ ಅದೇ ರೀತಿ ತಮ್ಮ ಅಮಾನುಷ ಚರಿತ್ರೆಗಳು ಮೋಕ್ಷಕ್ಕೆ ಕಾರಣವಾಗುವದು ಎಂಬುದನ್ನು ತಿಳಿಸಲು ಶೂದ್ರರಾಜನು ಭೂಮಿ ಅಗಿಯುವಂತೆ ಮಾಡಿದ್ದು, ಅವನ ಭಾಷೆಯಿಂದ ಉತ್ತರ ಕೊಟ್ಟಿದ್ದು, ವ್ಯಾಘ್ರರೂಪದಿಂದ ಬಂದ ದೈತ್ಯನನ್ನು ಸಂಹಾರ ಮಾಡಿದ್ದು. ಭೋಜನಾನಂತರದಲ್ಲಿ ಸಾವಿರಾರು ಬಾಳೆಹಣ್ಣು, 30 ಕೊಡ ಹಾಗೂ ಕುಡಿದದ್ದು, ಒಣಗಿದ್ದ ಗಿಡವನ್ನು ಫಲ-ಪುಷ್ಪಾದಿಗಳಾಗುವಂತೆ ಮಾಡಿ, ವಿಚಿತ್ರ ಚರಿತ್ರೆಗಳನ್ನು ತೋರಿಸಿದರು.

**ವ್ಯಾಖ್ಯಾನಸಮಯೇ ಪ್ರಾಪ್ತಂ ಫಣಿರಾಜಂ ಸುಪೂರ್ಣಧೀಃ ।**
**ಶಿಷ್ಯೇಭ್ಯೋ ದರ್ಶಯಾಮಾಸ ಸ ತತ್ಫಲಮಥಾಬ್ರವೀತ್ ॥ 12 ॥**

ಶ್ರೀಮದಾಚಾರ್ಯರು ಸೂತ್ರಭಾಷ್ಯದ ಪಾಠವನ್ನು ಹೇಳುವಾಗ ಬಂದ ಸನಕಾದಿಗಳಿಂದ ಸಹಿತರಾದ ಶೇಷದೇವರನ್ನು ಶಿಷ್ಯರನ್ನು ತೋರಿಸಿದರು. ಸನಕಾದಿಗಳು ಶೇಷದೇವರಿಗೆ ಭಾಷ್ಯಶ್ರವಣದ ಫಲವೇನು? ಎಂದು ಪ್ರಶ್ನೆ ಮಾಡಿದರು. ಮೋಕ್ಷವೇ ಭಾಷ್ಯ ಶ್ರವಣದ ಫಲ ಎಂದು ತಿಳಿಸಿ, ಮೋಕ್ಷದಲ್ಲಿಯ ಸುಖವಿಶೇಷವನ್ನು ನಿರೂಪಿಸುತ್ತಾ, ಆಚಾರ್ಯರ ಭಾಷ್ಯವನ್ನು ಸ್ವಯೋಗ್ಯತಾನುಸಾರ ಮನೋವಾಕ್ಕುಗಳಿಂದ ಆವರ್ತನ ಮಾಡುವರು. ಇಂಥ ಶ್ರೇಷ್ಠವಾದ ಸ್ವರೂಪಾನಂದ ಆವಿರ್ಭಾವರೂಪವಾದ ಮೋಕ್ಷ ಪಡೆಯುತ್ತಾರೆ ಎಂದು ಫಲ ತಿಳಿಸಿದರು.

**ಬಹೂಪದ್ರವದಂ ಮಾಯಿಮಂಡಲಂ ಸ್ವೀಯಮಂಡಲೇ ।**
**ಖಂಡಯಿತ್ವಾಽಖಂಡಶಕ್ತಿರ್ವಿರೇಜೇಽಖಂಡರಾಜವತ್ ॥ 13 ॥**

ಮಾಯಿಗಳು ತಮ್ಮ ಸ್ವೀಯಗುಂಪಿನಲ್ಲಿ ಅನೇಕ ರೀತಿಯಿಂದ ವಿಚಾರ ಮಾಡಿ ಆಚಾರ್ಯರಿಗೆ ಬಹೂಪದ್ರವನ್ನು ಕೊಡಲು ಪ್ರಯತ್ನಿಸಿದಾಗ, ಅವರನ್ನು ಆಚಾರ್ಯರು ಸಭೆಯಲ್ಲಿ ವಾದದಲ್ಲಿ ಪರಿಪೂರ್ಣ ಶಕ್ತಿಯಿಂದ ಸೋಲಿಸಿ.

ಅಖಂಡರಾಜನು (ಚಂದ್ರನು) ತನ್ನ ಪರಿಪೂರ್ಣ ಶಕ್ತಿಯಿಂದ ಶತ್ರುಗಳನ್ನು ಸಂಹರಿಸುವಂತೆ, ಆಚಾರ್ಯರು ಮಾಯಿಗಳನ್ನು ಸೋಲಿಸಿ, ಶೋಭಿಸಿದರು.

**ಏವಂ ಮಾಯಿಗಣಂ ಜಿತ್ವಾ ಪ್ರಖ್ಯಾತಂ ಭೂಮಿಮಂಡಲೇ ।**
**ಜಯಸಿಂಹಸಮಾಹೂತಂ ಕವಿಸಿಂಹೋ ನನಾಮ ತಮ್ ॥ 14 ॥**

ಹೀಗೆ ಮಾಯಿಗಳ ಸಮೂಹವನ್ನು ಗೆದ್ದು, ಇಡೀ ಭೂಮಂಡಲದಲ್ಲಿ ಪ್ರಖ್ಯಾತಿಯನ್ನು ಪಡೆದ ಆಚಾರ್ಯರನ್ನು ಜಯಸಿಂಹರಾಜನು ತಮ್ಮ ರಾಜ್ಯಕ್ಕೆ ಆಗಮಿಸಬೇಕೆಂದು ಭಕ್ತಿಪೂರ್ವಕವಾಗಿ ಪ್ರಾರ್ಥಿಸಿದನು. ಆಚಾರ್ಯರು ಅಲ್ಲಿಗೆ ಹೋದರು. ಅಲ್ಲಿ ಸುಬ್ರಹ್ಮಣ್ಯ ಪಂಡಿತರ ಮಕ್ಕಳಾದ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ಆಚಾರ್ಯರ ಮಹಿಮೆಯನ್ನು ಕೇಳಿ, ಅವರ ಗ್ರಂಥಗಳನ್ನು ನೋಡಿ, ಆದರ ಹೊಂದಿದ್ದರು. ಶ್ರೀಮದಾಚಾರ್ಯರಿಗೆ ಕವಿಸಿಂಹರಾದ ತ್ರಿವಿಕ್ರಮ ಪಂಡಿತರು ಸಾಷ್ಟಾಂಗಪೂರ್ವಕ ನಮಸ್ಕಾರಗಳನ್ನು ಮಾಡಿದರು.

**ಸದಾ ಶ್ರೀಹರಿಪಾದಾಬ್ಜಗತಮಾನಸಸಂಭ್ರಮಃ ।**
**ಸ್ನಾನವ್ಯಾಖ್ಯಾಭೋಜನಾದಿ ಕರೋತ್ಯನುದಿನಂ ಸುಧೀಃ ॥ 15 ॥**

ಆಚಾರ್ಯರು ಯಾವಾಗಲೂ, ನಿರಂತರವಾಗಿ ಶ್ರೀಹರಿಯ ಪಾದಗಳಲ್ಲಿಯೇ ಭಕ್ತಿ ಇಟ್ಟಿದ್ದರಿಂದ, ಪ್ರತಿನಿತ್ಯ ಅರುಣೋದಯದಿಂದ, ರಾತ್ರೀವರೆಗೆ ವಿಧಿಪೂರ್ವಕವಾಗಿ ಆಚರಿಸತಕ್ಕ ಸ್ನಾನ, ಪೂಜೆ, ಪಾಠ, ಪ್ರವಚನ, ಭೋಜನ, ಧ್ಯಾನ - ಇವೇ ಮೊದಲಾದವುಗಳನ್ನು ಶ್ರದ್ಧೆಯಿಂದ (ಮಾಡುತ್ತಿದ್ದರು) ನೆರವೇರಿಸುತ್ತಿದ್ದರು.

**ವ್ಯಾಖ್ಯಾತ್ರಾ ಬ್ರಹ್ಮಸೂತ್ರಾಣಾಂ ಪೂರ್ಣಪ್ರಜ್ಞೇನ ವಾದತಃ ।**
**ಜಿತಸ್ತಚ್ಛಿಷ್ಯತಾಂ ಪ್ರಾಪ್ಯ ಸೋಽಕರೋತ್ ತತ್ತ್ವದೀಪಿಕಾಮ್ ॥ 16 ॥**

ಶ್ರೀಮದಾಚಾರ್ಯರ ಜೊತೆ ತ್ರಿವಿಕ್ರಮ ಪಂಡಿತಾಚಾರ್ಯರು ಹದಿನೈದು ದಿನಗಳ ಪರ್ಯಂತ ವಾದ ಮಾಡಿದರು. ಶ್ರೀವೇದವ್ಯಾಸದೇವರ ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನ ಮಾಡುವ ಆಚಾರ್ಯರ ಸಂಗಡ ವಾದಿಸಿದಾಗ ವಾದದಲ್ಲಿ ಸೋತರು. ಆದರೆ, ಭಕ್ತಿಯಿಂದ ಆಚಾರ್ಯರ ಶಿಷ್ಯತ್ವ ವಹಿಸಿ ಆಚಾರ್ಯರಿಂದ ಶಾಸ್ತ್ರ, ಶ್ರವಣ ಮಾಡಿ, ಭಾಷ್ಯಕ್ಕೆ 'ತತ್ವಪ್ರದೀಪ' ಎಂಬ ಟೀಕೆಯನ್ನು ರಚಿಸಿದರು.

**ಸಂಪಾದಿತಸ್ವಕಾರ್ಯೇಽಸ್ಮಿನ್ ಸರ್ವಜ್ಞೇ ಸರ್ವದೇವತಾಃ ।**
**ವವೃಷುಃ ಪುಷ್ಪವಾರಂ ಖೇ ಸ್ಥಿತಾಃ ಸ್ತುತಿಪರಾ ಮುದಾ ॥ 17 ॥**

ಸರ್ವಜ್ಞರಾದ ಶ್ರೀಮದಾಚಾರ್ಯರು ತಮ್ಮ ಕಾರ್ಯವಾದ ಭಗವಂತನ ಸರ್ವೋತ್ತಮತ್ವ ಮೊದಲಾದ ಕಾರ್ಯಗಳನ್ನು ಉತ್ತಮ ರೀತಿಯಿಂದ ಪೂರೈಸಿ, ಐತರೇಯ ಉಪನಿಷತ್ತನ್ನು ಪಾಠ ಹೇಳುವ ಸಂದರ್ಭದಲ್ಲಿ ದೇವತೆಗಳು ಆಕಾಶದಲ್ಲಿ ನಿಂತು ಶ್ರೀಮದಾಚಾರ್ಯರ ಗುಣಗಾಯನ ಮಾಡುತ್ತಾ ನಂದನವನದ ಪುಷ್ಪಗಳ ವೃಷ್ಟಿ ಮಾಡಿದರು. ಆ ಪುಷ್ಪ ರಾಶಿಯಲ್ಲಿ ಶ್ರೀಮದಾಚಾರ್ಯರು ಅದೃಶ್ಯರಾದರು.

**ಸನ್ನಿಧಾನಂ ಗುಣವ್ಯಕ್ತಿಃ ಸ್ವರೂಪಸ್ಯ ನಿಬೋಧನಮ್ ।**
**ಸಾಧನೈಃ ಶೋಭನೈಃ ಕೀರ್ತಿಃ ಶಾಸ್ತ್ರರಾಜ್ಯಾಭಿಷೇಚನಮ್ ॥ 18 ॥**

ಶ್ರೀಮತ್ಸುಮಧ್ವವಿಜಯ ಪಾರಾಯಣದಿಂದ ಬರುವ ಫಲ.

ಒಂದನೇ ಸರ್ಗ – ಶ್ರೀಹರಿವಾಯುಗುರುಗಳ ಸನ್ನಿಧಾನ

ಎರಡನೇ ಸರ್ಗ – ಸದ್ಗುಣಗಳ ಅಭಿವ್ಯಕ್ತಿ

ಮೂರನೇ ಸರ್ಗ – ಸ್ವರೂಪಜ್ಞಾನ

ನಾಲ್ಕನೇ ಸರ್ಗ – ಒಳ್ಳೇ ಸಾಧನದಿಂದ ಕೀರ್ತಿಯು

ಐದನೇ ಸರ್ಗ – ವೇದಾಂತ ಸಾಮ್ರಾಜ್ಯದಲ್ಲಿ ಅಭಿಷೇಕವು

**ವಿಚಾರಃ ಸಾಧನೌಘಸ್ಯ ಜ್ಞೇಯರೂಪಪ್ರಬೋಧನಮ್ ।**
**ಉಪಾಸಾಯಾಮತಿಶಯೋ ದಾರ್ಢ್ಯಂ ಭಕ್ತೇರ್ಹರೌ ಗುರೌ ॥ 19 ॥**

ಆರನೇ ಸರ್ಗ – ಸಾಧನಸಮೂಹದ ಬಗ್ಗೆ ಜ್ಞಾನ (ವಿಚಾರ)

ಏಳನೇ ಸರ್ಗ – ಬಿಂಬರೂಪಿಯ ಜ್ಞಾನ

ಎಂಟನೇ ಸರ್ಗ – ಬಿಂಬೋಪಾಸನೆಯಲ್ಲಿ ಅತಿಶಯವು

ಒಂಭತ್ತನೇ ಸರ್ಗ – ಶ್ರೀಹರಿಗುರುಗಳಲ್ಲಿ ಭಕ್ತಿದಾರ್ಢ್ಯವು

**ಅಪೇಕ್ಷಿತಾಖಿಲಾವಾಪ್ತಿರ್ಮೋಕ್ಷಶಾಸ್ತ್ರಸುಲೋಲತಾ ।**
**ವಿಘ್ನನಾಶಃ ಸಾಧನಾನಾಂ ಸ್ವೀಯಮಾಹಾತ್ಮ್ಯ ಬೋಧನಮ್ ॥ 20 ॥**

ಹತ್ತನೆ ಸರ್ಗ - ಅಪೇಕ್ಷಿತ ಫಲಪ್ರಾಪ್ತಿ (ಇಷ್ಟಸಿದ್ಧಿ)

ಹನ್ನೊಂದನೆ ಸರ್ಗ - ಮೋಕ್ಷಕ್ಕೆ ಕಾರಣವಾದ ಶಾಸ್ತ್ರದಲ್ಲಿ ಸುಲಭವಾದ ರತಿ (ಆಸೆ)

ಹನ್ನೆರಡನೆ ಸರ್ಗ - ಸಾಧನ ಮಾರ್ಗದಲ್ಲಿ ಬರುವ ವಿಘ್ನಗಳ ನಾಶ.

ಹದಿಮೂರನೇ ಸರ್ಗ - ವಾಯುದೇವರ ಮಹಾತ್ಮ್ಯದ ತಿಳುವಳಿಕೆ.

**ಅಪರೋಕ್ಷದೃಶೇರ್ವಿಘ್ನನಾಶಸ್ತದ್ದಾಪನಂ ತಥಾ ।**
**ಮೋಕ್ಷದಾನಮಿತಿ ಪ್ರೋಕ್ತಂ ಫಲಂ ಷೋಡಶಕಂ ಪರಮ್ ॥ 21 ॥**

ಹದಿನಾಲ್ಕನೇ ಸರ್ಗ - ಅಪರೋಕ್ಷ ಜ್ಞಾನದಲ್ಲಿ ಬರುವ ವಿಘ್ನನಾಶ.

ಹದಿನೈದನೇ ಸರ್ಗ - ಅಪರೋಕ್ಷ ಜ್ಞಾನ (ಹೊಂದುವದು) ಪಡೆಯುವದು.

ಹದಿನಾರನೇ ಸರ್ಗ - ಸಾಕ್ಷಾತ್ ಮೋಕ್ಷ ಹೊಂದುವದು (ಪಡೆಯುವುದು)

ಹೀಗೆ, ಹದಿನಾರು ಸರ್ಗಗಳ ಫಲ ಇರುವದು.

**ಇತ್ಥಂ ಸುಮಧ್ವವಿಜಯೇ ಪ್ರಮೇಯಫಲಮಾಲಿಕಾ ।**
**ರಚಿತಾ ಭಿಕ್ಷುಣಾ ಭೂಯಾದ್ವಿಷ್ಣುವಕ್ಷಃಸ್ಥಲಾಶ್ರಿತಾ ॥ 22 ॥**

ಈ ರೀತಿಯಾಗಿ ಶ್ರೀಮಧ್ವವಿಜಯದಲ್ಲಿ ಪ್ರಮೇಯ ಫಲಮಾಲಿಕಾ ಎಂಬ ಗ್ರಂಥವು ಮಾಲಿಕೆಯು ಶ್ರೀವಿಷ್ಣುತೀರ್ಥರಿಂದ ರಚಿಸಲ್ಪಟ್ಟಿದ್ದು, ವಿಷ್ಣುವಿನ ವಕ್ಷಸ್ಥಲದಲ್ಲಿ ಧರಿಸಲ್ಪಡಲಿ ಎಂದು ಸಮರ್ಪಿಸಲ್ಪಡುತ್ತದೆ.

**॥ ಇತಿ ಶ್ರೀಮಾದಿನೂರು ವಿಷ್ಣುತೀರ್ಥ (ಆರಣ್ಯಕಾಚಾರ್ಯ)**

**ಕೃತಸುಮಧ್ವವಿಜಯಪ್ರಮೇಯಫಲಮಾಲಿಕಾ ॥**